ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಗುತ್ತಿಗೆ ಅವಧಿಯಲ್ಲಿ ಪಡೆದಿರುವ ಇಲಾಖಾ ವಾಹನದ ಬಗ್ಗೆ

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

616 (818) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರಾವಾರ ಜಿಲ್ಲೆಯಲ್ಲಿ ಯಾವ ಯಾವ ಇಲಾಖೆಗೆ ಹೊರಗುತ್ತಿಗೆ ಆಧಾರದ ಮೇಲೆ ವಾಹನ ನೀಡಲಾಗಿದೆ; (ಟೆಂಡರ್ ಪ್ರತಿಯೊಂದಿಗೆ, ತಾಲ್ಲೂಕುವಾರು/ ಜಿಲ್ಲಾವಾರು ವಿವರ ನೀಡುವುದು)

(ಆ) ಸದರಿ ವಾಹನ ಉಪಯೋಗಿಸಲು ಇರುವ ಮಾನದಂಡವೇನು; (ವಿವರ ನೀಡುವುದು)

(ಇ) ಕೆಲವೊಂದು ಇಲಾಖೆಯ ಅಧಿಕಾರಿಗಳು ತಮ್ಮ ವ್ಯಾಪ್ತಿ ಮೀರಿ ಅನಾವಶ್ಯಕವಾಗಿ ತಮ್ಮ ಸ್ವಂತ ಬಳಕೆಗೆ ಇಲಾಖಾ ವಾಹನ ಬಳಸಿಕೊಳ್ಳುತ್ತಿರುವುದು ಹಾಗೂ ತಮ್ಮ ವ್ಯಾಪ್ತಿ ಮೀರಿ ಹೊರ ಜಿಲ್ಲೆಗಳಿಗೂ ವಾಹನವನ್ನು ತೆಗೆದುಕೊಂಡು ಹೋಗಿ ವಾಸ್ತವ್ಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಈ) ಕಳೆದ 5 ವರ್ಷಗಳಿಂದ ಗುತ್ತಿಗೆ ಆಧಾರದ ಮೇಲೆ ವಾಹನ ಪಡೆದು ಕರ್ತವ್ಯ ನಿರ್ವಹಿಸುವ ಬಗ್ಗೆ ಲಾಗ್‌ಬುಕ್ಕಿನಲ್ಲಿ ನಮೂದಿಸಿದ ವಾಹನದ ಓಡಾಟದ ವಿವರದೊಂದಿಗೆ ಜಿಲ್ಲಾವಾರು ಹಾಗೂ ತಾಲ್ಲೂಕುವಾರು ಮಾಹಿತಿ ನೀಡುವುದು ?